

ಮಹಿಳೆಯ ಹಕ್ಕುಗಳು



# ನಮ್ಮ ಕಾನೂನುಗಳು

## 2 ಕರಾರು ಕಾರ್ಮಿಕ ಅಂತರರಾಜ್ಯ ವಲಸೆ ಕೆಲಸಗಾರರು

ಪ್ರಕಾಶಕರು
ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ
ಹಾಗೂ
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಕರ್ನಾಟಕ ಸರಕಾರ
ಇವರಿಗಾಗಿ,
**ಕವಿ ಕಾವ್ಯ ಟ್ರಸ್ಟ್, ಹೆಗ್ಗೋಡು**
1993, ಡಿಸೆಂಬರ್.

ಮೂಲ ಪ್ರಕಾಶಕರು

ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ

ಇವರಿಗೆ

ಮಾರ್ಗ್ ತಂಡದವರಿಂದ

ಕನ್ನಡ ಅವತರಣಿಕೆಯ ಪ್ರಕಾಶನವನ್ನು
ಸಾಧ್ಯವಾಗಿಸಿದ **UNICEF** ಸಂಸ್ಥೆಯ ನೆರವನ್ನು
ಗೌರವದಿಂದ ನೆನೆಯ

**ಮುಖಪುಟ**

ಪ್ರಸನ್ನ

**ಪುಸ್ತಕ ವಿನ್ಯಾಸ**

ಮುದ್ರ ಸಿಸ್ಟಮ್ಸ್, ಹೆಗ

**ಸಂಪಾದನೆ**

ಆಭ ಸಿಂಘಲ್ ಜೋ

**ಸಹಾಯ**

ಜ್ಯೋತಿ ಗುಪ್ತ, ಸೀಮ ಮಿಶ್ರ, ಕಮಲೇಶ ಕುಮಾರಿ

**ಅಕ್ಷರ ಜೋಡಣೆ**

ವಾಗರ್ಥ ಪ್ರಿಂಟಾನಿಕ್ಸ್, ಬೆಂಗಳೂರು

**ಮುದ್ರಕರು**

ಪಯೋನಿಧಿ ಪ್ರಿಂಟರ್ಸ್ ಬೆಂಗಳೂರು





ಎಂ. ವೀರಪ್ಪ ಮೊಯಿಲಿ
ಮುಖ್ಯ ಮಂತ್ರಿ

27, ನವೆಂಬರ್, 93.
ಬೆಂಗಳೂರು - 560001.




## ಸಂದೇಶ

ಮಹಿಳೆಯರ ಹಕ್ಕುಗಳನ್ನು ಕುರಿತ ಈ ಪುಸ್ತಕಮಾಲಿಕೆಯನ್ನು ಕನ್ನಡದ ಜನತೆಗೆ ಅರ್ಪಿಸಲಿಕ್ಕೆ ನನಗೆ ತುಂಬ ಹೆಮ್ಮೆ ಎನ್ನಿಸುತ್ತಿದೆ. ದುಡಿಯುವ ಮಹಿಳೆಯರು, ಗ್ರಾಮೀಣ ಮಹಿಳೆಯರು ಹಾಗೂ ಕೆಳವರ್ಗಗಳನ್ನು ಗಂಭೀರ ಸಮಸ್ಯೆಗಳು ಕಾಡುತ್ತಿವೆ. ಅವರು ಸಾಮಾಜಿಕವಾಗಿ ತುಳಿತಕ್ಕೆ ಒಳಗಾಗಿದ್ದಾರೆ. ಕಾರ್ಮಿಕಳಾಗಿ, ಜೀತದಾಳಾಗಿ, ಮದುವೆಯಲ್ಲಿ, ವಿಚ್ಛೇದನದಲ್ಲಿ, ಆಸ್ತಿ ಹಕ್ಕಿನಲ್ಲಿ, ಕೋರ್ಟಿನಲ್ಲಿ, ಠಾಣೆಗಳಲ್ಲಿ, ಆಕೆ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾಳೆ. ಅನೇಕರು ಅತ್ಯಾಚಾರಕ್ಕೆ ಒಳಗಾಗುತ್ತಾರೆ. ರಾಜ್ಯಾಂಗದತ್ತವಾಗಿ ಹಾಗೂ ಕಾನೂನಿನ ಅಡಿಯಲ್ಲಿ ಅವರಿಗೆ ದಕ್ಕಿರುವ ಹಕ್ಕುಗಳ ಬಗ್ಗೆ ಅವರಿಗೆ ಅರಿವಿಲ್ಲ. ಅಂತಹ ಅರಿವು ಮೂಡದ ಹೊರತು ಅವರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ನಿಲ್ಲಿಸುವುದೂ ಸಾಧ್ಯವಿಲ್ಲ. ಹಾಗೆಂದು ಭಾರಿ ಗಾತ್ರದ 'ಲಾ' ಪುಸ್ತಕಗಳನ್ನು ಓದಿ ಅರಗಿಸಿಕೊಳ್ಳಿ ಎಂದು ಅನಕ್ಷರಸ್ಥರಿಂದ ಹಾಗೂ ನವ ಸಾಕ್ಷರ ಮಹಿಳೆಯರಿಂದ ಅಪೇಕ್ಷಿಸುವುದೂ ಸಾಧುವಲ್ಲ. ಇಂತಹದ್ದೊಂದು ಸಂದಿಗ್ಧವನ್ನು ನಿವಾರಿಸುತ್ತದೆ, ಈ ಮಾಲಿಕೆಯ ಹತ್ತು ಪುಸ್ತಕಗಳು.

ನಮ್ಮ ಸರ್ಕಾರದ ಕನ್ನಡ ಜಾಗೃತಿ ವರ್ಷದ ಆಚರಣೆಯಲ್ಲಿ ಈ ಪುಸ್ತಕಗಳ ಪ್ರಕಟಣೆ ತುಂಬ ಮಹತ್ವಪೂರ್ಣ ಕೊಡುಗೆ ಎಂದು ನನ್ನ ಭಾವನೆ. ಕನ್ನಡದ ಬೆಳವಣಿಗೆ ತುಂಬ ಅಗತ್ಯವಿರುವುದು ಕೆಳವರ್ಗಗಳಿಗೆ ಹಾಗೂ ಮಹಿಳೆಯರಿಗೆ. ಅವರನ್ನು ಗಮನದಲ್ಲಿಟ್ಟುಕೊಂಡು, ಸರಳವಾದ ಭಾಷೆ ಬಳಸಿ, ಚಿತ್ರಗಳ ಸಹಿತ, ಅವರ ಬದುಕಿಗೆ ಅನ್ವಯಿಸುವ ಉದಾಹರಣೆಗಳೊಂದಿಗೆ, ರಚಿತವಾಗಿರುವ ಈ ಪುಸ್ತಕಗಳು ಕರ್ನಾಟಕದ ಮೂಲೆ ಮೂಲೆ ತಲುಪಬೇಕು ಎಂದು ನಾನು ಆಶಿಸುತ್ತೇನೆ.

(ಎಂ. ವೀರಪ್ಪ ಮೊಯಿಲಿ)

# ಗುತ್ತಿಗೆ ಕಾರ್ಮಿಕ

**ಮೂಲ ಪಾಠ**
ಸೌರಭ್ ಆನಂದ್ ಪ್ರಕಾಶ್

**ಚಿತ್ರಗಳು**
ಪ್ರಸನ್ನ

# ಗುತ್ತಿಗೆ ಕಾರ್ಮಿಕ

ಬಹಳಷ್ಟು ಕ್ಷೇತ್ರಗಳಲ್ಲಿ ಕಾರ್ಮಿಕರು ಕಂಟ್ರ್ಯಾಕ್ಟರರ ಮೂಲಕ ನಿಯೋಜಿತರಾಗುತ್ತಾರೆ. ಈ ಕಂಟ್ರ್ಯಾಕ್ಟರರು ಸ್ಥಳದಿಂದ ಸ್ಥಳಕ್ಕೆ ಸಂಚರಿಸುವ ವ್ಯಕ್ತಿಗಳಾಗಿರುತ್ತಾರೆ. ಇವರು ಕೆಲಸಗಾರರ ಯೋಗಕ್ಷೇಮದ ಬಗ್ಗೆ ಚಿಂತಿಸುವುದಿಲ್ಲ. ಕೆಲಸಗಾರರು ಕೆಲಸವನ್ನು ನಿರಾಕರಿಸಲಾರದಷ್ಟು ಬಡವರಾಗಿರುತ್ತಾರೆ. ಇದರಿಂದಾಗಿ ಕಂಟ್ರ್ಯಾಕ್ಟರರು ಸರಿಯಾದ ಕೂಲಿ ನೀಡದೆ ಹೆಚ್ಚು ದುಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಕೆಲಸಗಾರರಾದರೊ ಅತ್ಯಂತ ಹೀನಾಯ ಪರಿಸ್ಥಿತಿಗಳಲ್ಲಿ ಜೀವಿಸುತ್ತಾರೆ. ಖಾಯಂ ಕೆಲಸಗಾರರಲ್ಲದಿರುವುದರಿಂದ ಅವರಿಗೆ ಯಾವುದೇ ಭದ್ರತೆ ಇರುವುದಿಲ್ಲ.



ಈ ಕೆಲಸಗಾರರ ದುಸ್ಥಿತಿಯನ್ನು ನೋಡಿ, ಸರ್ಕಾರವು ಇವರ ಹಿತಾಸಕ್ತಿಯನ್ನು ಕಾಪಾಡುವುದಕ್ಕಾಗಿ ಒಂದು ಕಾನೂನನ್ನು ಮಾಡಿದೆ. ಈ ಕಾನೂನನ್ನು **ಗುತ್ತಿಗೆ ಕಾರ್ಮಿಕ (ವಿನಿಮಯ ಮತ್ತು ರದ್ದಿಯಾತಿ) ಅಧಿನಿಯಮ, 1970** ಎಂದು ಕರೆಯಲಾಗುತ್ತದೆ.

ಈ ಕಾನೂನಿನ ಮೇರೆಗೆ ಕಂಟ್ರ್ಯಾಕ್ಟರರ ಮೂಲಕ ಕಾರ್ಮಿಕರನ್ನು ಕೆಲಸಕ್ಕೆ ತೆಗೆದುಕೊಳ್ಳುವ ಯಾವನೇ ನಿಯೋಜಕನು ತನ್ನ ಹೆಸರನ್ನು ನೋಂದಾಯಿಸಿರಬೇಕು. ಒಬ್ಬ ಮಾಲೀಕನಿಗೆ 20 ಅಥವಾ ಹೆಚ್ಚಿನ ಕೆಲಸಗಾರರನ್ನು ಒದಗಿಸುವ ಯಾವನೇ ಕಂಟ್ರ್ಯಾಕ್ಟರನು ಲೈಸೆನ್ಸನ್ನು ಹೊಂದಿರಬೇಕು.

**ಈ ಕಾನೂನು ಕೆಲಸಗಾರರಿಗೆ ಎಷ್ಟರಮಟ್ಟಿಗೆ ಸಹಾಯಕವಾಗುತ್ತದೆ ?**

ನೋಂದಾಯಿತ ಅಥವಾ ಲೈಸೆನ್ಸ್ ಹೊಂದಿದ ನಿಯೋಜಕ ಅಥವಾ ಕಂಟ್ರ್ಯಾಕ್ಟರನು ಈ ಕೆಲಸಗಾರರ ಯೋಗಕ್ಷೇಮಕ್ಕೆ ಜವಾಬ್ದಾರನಾಗುತ್ತಾನೆ. ಇವರ ವಿರುದ್ಧ ಕೆಲಸಗಾರರು ದೂರು ನೀಡಿದರೆ, ಸರ್ಕಾರವು ಸೂಕ್ತ ಮಜೂರಿ ಮತ್ತು ಸೌಲಭ್ಯಗಳನ್ನು ನೀಡುವಂತೆ ನಿಯೋಜಕ ಅಥವಾ ಕಂಟ್ರ್ಯಾಕ್ಟರನನ್ನು ಒತ್ತಾಯಿಸುತ್ತದೆ.



ಕಂಟ್ರಾಕ್ಟರನು ತನ್ನ ಕೆಲಸಗಾರರಿಗೆ ನೀಡಬೇಕಾದ ಸೌಲಭ್ಯಗಳಾವುವು ?

ನಿಮ್ಮ ಕಂಟ್ರಾಕ್ಟರನು ಈ ಮುಂದಿನ ಸೌಲಭ್ಯಗಳನ್ನು ನೀಡಬೇಕು :

- ಆರು ವರ್ಷದೊಳಗಿನ ಕೆಲಸಗಾರರ ಮಕ್ಕಳ ಉಪಯೋಗಕ್ಕಾಗಿ ಕೊನೇಪಕ್ಷ ಎರಡು ಕೊಠಡಿಗಳನ್ನು ಆತ ಒದಗಿಸಬೇಕು. ಈ ಕೊಠಡಿಗಳಲ್ಲೊಂದನ್ನು ಆಟಕ್ಕಾಗಿಯೂ








ಮತ್ತೊಂದನ್ನು ಮಲಗಿಸುವ ಕೋಣೆಯಾಗಿಯೂ ಉಪಯೋಗಿಸಲಾಗುವುದು. ಕಂಟ್ರಾಕ್ಟರನು ಮಕ್ಕಳಿಗೆ ಆಟಿಕೆ ಮತ್ತು ಇತರ ಸೌಲಭ್ಯಗಳನ್ನು ಒದಗಿಸಬೇಕು.

- ಕುಡಿಯುವ ನೀರು, ಸಾಕಷ್ಟು ಶೌಚಾಲಯಗಳು, ಮೂತ್ರಾಲಯಗಳು, ಬಟ್ಟೆ ಒಗೆದುಕೊಳ್ಳಲು ಸೌಲಭ್ಯಗಳು ಮತ್ತು ಪ್ರಥಮ ಚಿಕಿತ್ಸೆ - ಇಂಥ ಸೌಲಭ್ಯಗಳನ್ನು ನೀಡಬೇಕು. ಕೆಲಸ ಪ್ರಾರಂಭಿಸಿದ ಏಳು ದಿನಗಳೊಳಗೆ ಈ ಸೌಲಭ್ಯಗಳನ್ನು ನೀಡಬೇಕು.





ನಿಮ್ಮ ಕಂಟ್ರಾಕ್ಟರನು ಈ ಸೌಲಭ್ಯಗಳನ್ನು ಒದಗಿಸದಿದ್ದರೆ ಮಾಲೀಕನು ಒದಗಿಸಬೇಕಾಗುತ್ತದೆ.

- ನಿಮ್ಮ ಕೆಲಸವು ಕೊನೇಪಕ್ಷ ಮೂರು ತಿಂಗಳುಗಳವರೆಗೆ ಮುಂದುವರೆಯುವ ಸಂಭವವಿದ್ದು ನೀವು ರಾತ್ರಿ ಕೆಲಸ ನಡೆಯುವ ಸ್ಥಳದಲ್ಲೇ ತಂಗಬೇಕಾದರೆ ಕಂಟ್ರಾಕ್ಟರನು ನಿಮಗಾಗಿ ಮಲಗುವ ಕೋಣೆಗಳನ್ನು ಒದಗಿಸಬೇಕು ಅಥವಾ ವ್ಯವಸ್ಥೆಮಾಡಬೇಕು. ನೀವು ಕೆಲಸ ಪ್ರಾರಂಭಿಸಿದ 15 ದಿನಗಳೊಳಗಾಗಿ ಈ ಸೌಲಭ್ಯವನ್ನು ಒದಗಿಸಬೇಕು. ಕಂಟ್ರಾಕ್ಟರನು ಈ ಸೌಲಭ್ಯವನ್ನು ಒದಗಿಸದಿದ್ದರೆ ನಿಯೋಜಕನು ಈ ಸೌಲಭ್ಯವನ್ನು ಒದಗಿಸಬೇಕು.





- ಮಹಿಳೆಯರಿಗೆ ಪ್ರತ್ಯೇಕ ಕೊಠಡಿಯನ್ನು ಒದಗಿಸ ಬೇಕು. ಕೊಠಡಿಗೆ ಗಾಳಿ ಬೆಳಕು ಸರಿಯಾಗಿ ಬರುವಂತೆ ವ್ಯವಸ್ಥೆ ಇರಬೇಕು.
- ಕೊಠಡಿಯು ಬಿಸಿಲು, ಗಾಳಿ, ಮಳೆಯಿಂದ ರಕ್ಷಣೆ ನೀಡು ವಂತಿರಬೇಕು; ಸಮತಟ್ಟಾದ, ನಯವಾದ ನೆಲವನ್ನು ಹೊಂದಿರಬೇಕು. ವಿಶ್ರಾಂತಿ ಕೊಠಡಿಯು ಕೆಲಸ ಮಾಡುತ್ತಿರುವ ಸ್ಥಳದಿಂದ ಹೆಚ್ಚು ದೂರದಲ್ಲಿರಬಾರದು. ಅಲ್ಲೂ ಸಹ ಕುಡಿಯುವ ನೀರಿನ ಸರಬರಾಜು ಇರಬೇಕು.



● ನಿಮ್ಮ ಕೆಲಸವು ಆರು ತಿಂಗಳು ಮುಂದುವರೆಯುವ ಸಂಭವವಿದ್ದು ಅಲ್ಲಿ 100 ಅಥವಾ ಹೆಚ್ಚು ಮಂದಿ ಕರಾರು ಕೆಲಸಗಾರರು ಕೆಲಸ ಮಾಡುತ್ತಿದ್ದರೆ ಆಗ ಕಂಟ್ರಾಕ್ಟರನು ಲಾಭರಹಿತ-ನಷ್ಟರಹಿತ ಆಧಾರದ ಮೇಲೆ ಕ್ಯಾಂಟೀನ್ ವ್ಯವಸ್ಥೆ ಮಾಡಬೇಕು. ಈ ವ್ಯವಸ್ಥೆಯನ್ನು ಕೆಲಸ ಪ್ರಾರಂಭಿಸಿದ 60 ದಿನಗಳೊಳಗೆ ಮಾಡಬೇಕು.



- ನಿಮ್ಮ ಕಂಟ್ರಾಕ್ಟರನು ಕ್ಯಾಂಟೀನಿನ ವ್ಯವಸ್ಥೆಯನ್ನು ಮಾಡದಿದ್ದರೆ, ನಿಯೋಜಕನು ಅದನ್ನು ಮಾಡಬೇಕು. ಕ್ಯಾಂಟೀನಿನಲ್ಲಿ ಊಟದ ಹಾಲ್, ಅಡಿಗೆ ಕೋಣೆ, ದಾಸ್ತಾನು ಕೊಠಡಿ, ಭೋಜನವಸ್ತುಗಳ ಕೋಣೆ ಮತ್ತು ತೊಳೆಯುವ ಸೌಲಭ್ಯಗಳು ಇರಬೇಕು.
- ಇಲ್ಲಿ ಸರಿಯಾದ ಬೆಳಕಿನ ವ್ಯವಸ್ಥೆ ಇದ್ದು ನೆಲವು ನಯವಾಗಿ ಮತ್ತು ಉತ್ತಮ ರೀತಿಯಲ್ಲಿರಬೇಕು.
- ಈ ಉಪಹಾರಗೃಹವನ್ನು ಸ್ವಚ್ಛ ಹಾಗೂ ನಿರ್ಮಲವಾಗಿ ನಡೆಸಬೇಕು. ಮುಚ್ಚಿದ ಮೋರಿಗಳಿದ್ದು, ಕಸ ಮುಸುರೆಗಳ ಸಂಗ್ರಹಣೆ ಮತ್ತು ವಿಲೇವಾರಿಗಾಗಿ ಸೂಕ್ತ ವ್ಯವಸ್ಥೆ ಮಾಡಿರಬೇಕು.
- ಊಟದ ಕೋಣೆಯ ಒಂದು ಭಾಗವನ್ನು ಮಹಿಳೆಯರಿಗಾಗಿ ಮೀಸಲಿಡಬೇಕು ಮತ್ತು ಅವರು ಕೈತೊಳೆದುಕೊಳ್ಳಲು ಪ್ರತ್ಯೇಕ ಸ್ಥಳವಿರಬೇಕು. ಉಪಹಾರ ಗೃಹ ಸುಸೂತ್ರವಾಗಿ ನಡೆಯುವಂತೆ ಸಾಕಷ್ಟು ಪಾತ್ರೆ, ಪೀಠೋಪಕರಣ ಇತ್ಯಾದಿಗಳು ಇರಬೇಕು ಮತ್ತು ಸಿಬ್ಬಂದಿ ಸ್ವಚ್ಛವಾದ ಬಟ್ಟೆಗಳನ್ನು ಧರಿಸಿರಬೇಕು.
- ಪುರುಷರು ಮತ್ತು ಮಹಿಳೆಯರಿಗಾಗಿ, ಅನುಕೂಲವಾದ ಜಾಗದಲ್ಲಿ, ಸಾಕಷ್ಟು ಸಂಖ್ಯೆಯ ಮೂತ್ರಾಲಯ ಶೌಚಾಲಯಗಳಿರಬೇಕು. ಅವುಗಳನ್ನು ನಿರ್ವಹಿಸಿಕೊಂಡು ಹೋಗುವ ವ್ಯವಸ್ಥೆ ಮಾಡಿರಬೇಕು.
- ಸಂಬಳ ಪಾವತಿಯ ಹೊಣೆ ಕಂಟ್ರಾಕ್ಟರನದಾಗಿರುತ್ತದೆ. ನಿಮ್ಮ ಕಂಟ್ರಾಕ್ಟರನು ಮಾಲೀಕರ ಪ್ರತಿನಿಧಿಯ ಸಮಕ್ಷಮದಲ್ಲಿ ಎಲ್ಲಾ ಮಜೂರಿ ಸಂದಾಯ ಮಾಡಬೇಕು. ಅದು ಕೊನೇಪಕ್ಷ ತಿಂಗಳಿಗೊಮ್ಮೆ ಆಗಬೇಕು; ನಗದು ರೂಪದಲ್ಲಿರಬೇಕು. ಅದರಲ್ಲಿ ಯಾವುದೇ ಕಡಿತವನ್ನು ಮಾಡಕೂಡದು.

ಆದಾಗ್ಯೂ, ಕಂಟ್ರಾಕ್ಟರನು ಸಂಬಳ ಪಾವತಿ ಮಾಡದಿದ್ದರೆ, ನೀವು ಮಾಲೀಕರನ್ನು ಕೇಳಬಹುದು. ನಿಮಗೆ ಕೊಡುವ ಮಜೂರಿಯು ಕನಿಷ್ಠ ವೇತನಕ್ಕಿಂತ ಕಡಿಮೆ ಇರಬಾರದು, ಹೆಚ್ಚಿರಬಹುದು.

ಅನೇಕಬಾರಿ ನಿಯೋಜಕನು ಕಂಟ್ರಾಕ್ಟರನಿಗೆ ಕನಿಷ್ಟ ಮಜೂರಿಯನ್ನು ಪಾವತಿ ಮಾಡುತ್ತಾನೆ. ಕಂಟ್ರಾಕ್ಟರನು ಅದರಲ್ಲೆ ತನ್ನ ಕಮೀಷನನ್ನು ಮುರಿದುಕೊಳ್ಳುತ್ತಾನೆ. ಆದ್ದರಿಂದ ವಾಸ್ತವವಾಗಿ ನೀವು ಪಡೆಯುವ ಮೊತ್ತ ಕನಿಷ್ಠ ಕೂಲಿಗಿಂತ ಕಡಿಮೆಯಾಗಿರುವ ಸಾಧ್ಯತೆಗಳಿವೆ. ಕಂಟ್ರಾಕ್ಟರನಿಗೆ ಕಮೀಷನ್ ಕೊಡುವುದು ನಿಯೋಜಕನ ಹೊಣೆ. ನಿಮಗೆ ನಿಮ್ಮ ಪೂರ್ಣ ಸಂಬಳ ಸಿಗಬೇಕು. ಕಂಟ್ರಾಕ್ಟರನು ನಿಮ್ಮ ಸಂಬಳದಿಂದ ತನ್ನ ಕಮೀಷನನ್ನು ಮುರಿದುಕೊಳ್ಳಕೂಡದು.

- ನಿಯೋಜಕನು, ನಿಮ್ಮದೇ ರೀತಿಯ ಕೆಲಸ ಮಾಡುವ ತನ್ನ ಖಾಯಂ ಕೆಲಸಗಾರರ ಕೆಲಸದ ಅವಧಿಗಿಂತ ಹೆಚ್ಚಿಗೆ ನಿಮ್ಮಿಂದ ಕೆಲಸ ಮಾಡಿಸಬಾರದು. ನಿಮ್ಮ ಮಾಲೀಕನ ಖಾಯಂ ನೌಕರರಿಗೆ ಸಿಕ್ಕುವ ರಜೆಗಳು ನಿಮಗೂ ಸಿಗಬೇಕು.




- ಬೇರೆಡೆಗಳಲ್ಲಿ ಖಾಯಂ ಕೆಲಸಗಾರರು ನಿರ್ವಹಿಸುತ್ತಿರುವ ಕೆಲಸಗಳನ್ನು ನಿಮ್ಮಲ್ಲಿ ನೀವು ಗುತ್ತಿಗೆ ಕಾರ್ಮಿಕನಾಗಿ ನಿರ್ವಹಿಸುತ್ತಿದ್ದರೆ, ಹಾಗೂ ನಿಮ್ಮ ಮಾಲೀಕ ಪೂರ್ಣಾವಧಿ ಕೆಲಸ ಕೊಡಬಲ್ಲನಾದರೆ, ನಿಮಗೆ ಪೂರ್ಣಾವಧಿ ಕೆಲಸ ಸಿಗಬೇಕು.

# ಅಂತರರಾಜ್ಯ ವಲಸೆ ಕೆಲಸಗಾರರು

**ಮೂಲ ಪಾಠ**
ಸೌರಭ್ ಆನಂದ್ ಪ್ರಕಾಶ್

**ಚಿತ್ರಗಳು**
ಪ್ರಸನ್ನ

# ಅಂತರ ರಾಜ್ಯ ವಲಸೆ ಕಾರ್ಮಿಕರು

ಸುಮಿತ್ರ, ಒಬ್ಬ ಸಮಾಜ ಕಾರ್ಯಕರ್ತೆ. ಆಕೆ ಅಸಂಘಟಿತ ಕಾರ್ಮಿಕರ ನಡುವೆ ಕೆಲಸ ಮಾಡುತ್ತಾಳೆ. ಪಂಜಾಬು, ಹರಿಯಾಣಗಳಲ್ಲಿ, ಬೇರೆ ರಾಜ್ಯಗಳಿಂದ ಕೆಲಸ ಹುಡುಕಿಕೊಂಡು ಬರುವ ಬಿಹಾರಿ ಕೆಲಸಗಾರರ ಮಧ್ಯೆ ಕೆಲಸ ಮಾಡಿ, ಅವರಿಗೆ ಸಹಾಯ ಮಾಡಿದ್ದಾಳೆ. ಈಗವಳು ತನ್ನೂರಾದ ಬಿಜಾಪುರ ಜಿಲ್ಲೆಗೆ ರಜಕ್ಕೆ ಬಂದಿದ್ದಾಳೆ. ಉತ್ತರ ಕರ್ನಾಟಕದಲ್ಲಿ ಈ ವರ್ಷ ಬರಗಾಲ ಬಂದಿದೆ. ಅವಳು ತನ್ನೂರ ಸುತ್ತಮುತ್ತ ಇರುವ ಅಕುಶಲ ಕೆಲಸಗಾರರನ್ನ ಕೆಲವರನ್ನ ಭೆಟ್ಟಿಯಾಗುತ್ತಾಳೆ. ಅವರೆಲ್ಲ ಭೂಹೀನರು. ಇತರರ ಹೊಲಗಳಲ್ಲಿ ದುಡಿದು ಹೇಗೋ ಹೊಟ್ಟೆ ಹೊರೆದು ಕೊಳ್ಳಲೆಂದು ಹೆಣಗುವವರು. ಆ ಹೆಂಗಸರು ಸುಮಿತ್ರಳ ಎದುರು ತಮ್ಮ ಗೋಳುಕರೆ ತೋಡಿಕೊಳ್ಳುತ್ತಾರೆ.



ಆ ಬಡಪಾಯಿ ಭೂ ಹೀನರಿಗೆ ಸುಮಿತ್ರ ಬೇರೆ ರಾಜ್ಯಗಳಲ್ಲಿ ಕೆಲಸ ಹುಡುಕಿಕೊಳ್ಳುವಂತೆ ಹೇಳುತ್ತಾಳೆ

**ಯಲ್ಲವ್ವ** : ಸುಮಿತ್ರಕ್ಕ! ಎಲ್ಲ ನಿನಗೇ ತಿಳಿದಿದೆ. ಈ ಊರಲ್ಲಿ ನಮ್ಮ ಪಾಡು ನಾಯಿ ಪಾಡಾಗಿದೆ. ಸರಿಯಾಗಿ ಮಳೆಯಾದರೇನೇ ಇಲ್ಲಿ ಕೈತುಂಬ ಕೆಲಸ ಇರೋಲ್ಲ. ಅಂಥಾದ್ದರಲ್ಲಿ ಎರಡು ವರ್ಷದಿಂದ ಇಲ್ಲಿ ಬರಗಾಲ; ಇಲ್ಲೂ ಕೆಲಸ ಇಲ್ಲ, ಪಕ್ಕದ ಹಳ್ಳಿಯಲ್ಲೂ ಇಲ್ಲ, ಇರೋ ಒಂದಿಷ್ಟು ಕೆಲಸಕ್ಕೆ ಕೈಚಾಚಿ ಕೂಂಡಿರೋರು ವಿಪರೀತ ಮಂದಿ. ಮಗಳು ಮದುವೆಗೆ ಬಂದು ನಿಂತಿದಾಳೆ. ಎಲ್ಲಿಂದ ತರಲಿ ಹೇಳು ಹಣ. ನೀನೇ ಏನಾದರೂ ಗತಿ ಕಾಣಿಸಬೇಕು ನಮಗೆ.

**ಸುಮಿತ್ರ** : ಗೋವಾಕ್ಕೆ ಅಥವಾ ಮಹಾರಾಷ್ಟ್ರಕ್ಕೆ ಯಾಕೆ ಹೋಗಬಾರದು ನೀವು? ಈಗ ಅಲ್ಲಿ ಕುಯಿಲಿನ ಸಮಯ. ಈ ವರ್ಷ ಒಳ್ಳೆ ಕಬ್ಬಿನ ಬೆಳೆ ಆಗಿದೆ ಅಲ್ಲಿ. ಗಟ್ಟಿ ಮುಟ್ಟಾದ ಆಳುಗಳಿಗೆ ಕೈತುಂಬಾ ಕೆಲಸ ಸಿಗುತ್ತೆ. ನೀನು, ನಿನ್ನ ಗಂಡ, ಮಕ್ಕಳು, ಎಲ್ಲ ಹೋಗಿ. ಸುಗ್ಗಿ ಮುಗಿಯೋ ತನಕ ಅಂತೂ ಯೋಚನೆ ಇರೋದಿಲ್ಲ ನಿಮಗೆ.

**ಯಲ್ಲವ್ವ** : ನನಗಾಗಲೀ ನಮ್ಮ ಜಮಾನರಿಗಾಗಲೀ ಕನ್ನಡ ಬಿಟ್ಟರೆ ಬೇರೆ ಭಾಷೆ ಬರದು. ನಾವು ಯಾರೂ ಬಿಜಾಪುರ ಜಿಲ್ಲೆಯಿಂದ ಆಚೆ ಕದಲಿದೋರೇ ಅಲ್ಲ. ಪರಸ್ಥಳ, ಪರವೂರು, ಏನೋ! ಎಂತೊ! ಅಲ್ಲಿ ಹ್ಯಾಗೋ ಏನೋ? ಭಾಷೆ ಬರದೆ ಹ್ಯಾಗೆ ಏಗೋದು ಹೇಳವ್ವ?

**ಸುಮಿತ್ರ** : ಅಷ್ಟೊಂದು ಚಿಂತಿ ಮಾಡಬ್ಯಾಡ ನೀನು. ನಿನ್ನ ಹಂಗೆ ಬೇರೆ ರಾಜ್ಯಕ್ಕೆ ಗುಳೆಹೋಗಿ ಕೆಲಸ ಮಾಡೋರು ಬಹಳ ಮಂದಿ ಇದಾರೆ. ಅವರಿಗೂ ಭಾಷೆ ಬರಲ್ಲ. ಹರಿಯಾಣದಲ್ಲಿ ಬಿಹಾರಿ ಕೆಲಸಗಾರರ ನಡುವೆ ಇದ್ದು ನೋಡಿದೀನಿ ನಾನು. ಅದೂ ಅಲ್ಲದೆ ವಲಸೆ ಕಾರ್ಮಿಕರ ಹಿತ ಕಾಪಾಡಲಿಕ್ಕೆ ಅಂತ ಸರ್ಕಾರ ಕಾನೂನು ಮಾಡಿದೆ. **ಅಂತರ ರಾಜ್ಯ ವಲಸೆ ಕಾರ್ಮಿಕರ ಅಧಿನಿಯಮ 1979** ಅಂತ ಕರೀತಾರೆ ಈ ಕಾನೂನನ್ನ. ಅದು ನಿಮ್ಮ ಹಿತ ಕಾಪಾಡುತ್ತೆ.

**ಪಾರ್ವತಿ** : ನಮ್ಮ ಪಕ್ಕದ ಊರಿನಿಂದ ಸುಮಾರು ಜನ, ಪ್ರತೀವರ್ಷ ಮಹಾರಾಷ್ಟ್ರದ ಕಡೆ ಕೆಲಸಕ್ಕೆ ಹೋಗಿ ಬರ್ತಾರೆ, ನನಗೆ ಗೊತ್ತು. ಅದ್ಯಾರೋ ಸುಧಾಕರ ನಾಯಕ್ ಅಂತ ಒಬ್ಬರು ಅಲ್ಲಿಂದ ಬಂದು ಕೆಲಸಗಾರರನ್ನ ಕರೆದುಕೊಂಡು ಹೋಗ್ತಾರೆ. ಈ ವರ್ಷನೂ ಬಂದಿದಾರಂತೆ. ಇಲ್ಲಿಂದ ಜನಗಳನ್ನ ಕಲೆಹಾಕಿಕೊಂಡು ಅಲ್ಲಿ ದೊಡ್ಡ ಜಮೀನುದಾರರಿಗೆ, ಕಬ್ಬು ಅರೆಯೋ ಗಾಣಗಳವರಿಗೆ ಕೂಲಿಗಳನ್ನ ಒದಗಿಸ್ತಾರಂತೆ. ಗೋವಾತನಕ ಅವರ ವಹಿವಾಟು ಇದೆಯಂತೆ. ಅವರನ್ನ ಕಂಡರೆ ಆಗಬಹುದು ಅಂತಿಯಾ?




ಬಹಳಷ್ಟು ಕೆಲಸಗಾರರು ಕೆಲಸ ಹುಡುಕಿಕೊಂಡು ಪರ ರಾಜ್ಯಗಳಿಗೆ ವಲಸೆ ಹೋಗುತ್ತಾರೆ

SOAP

NR

ಸುಮಿತ್ರ : ಖಂಡಿತಾ ಹೋಗಿ ಕಾಣಿ. ನಿಮ್ಮ ನಿಮ್ಮ ಮನೆಯವರನ್ನೂ ಕರೆದುಕೊಂಡು ಹೋಗಿ. ಆದರೆ ಅವರ ಜೊತೆ ಹೋಗಲಿಕ್ಕೆ ಒಪ್ಪಿಗೆ ಕೊಡುವ ಮುಂಚೆ ಆತ ನಿಜವಾದ ಕಂಟ್ರಾಕ್ಟರ್ ಹೌದಾ ಅಥವಾ ನಕಲಿ ಮನುಷ್ಯನಾ ಖಾತ್ರಿಮಾಡಿಕೊಳ್ಳಿ.

ಯಲ್ಲವ್ವ : ಅದು ಹ್ಯಾಗವ್ವ ಖಾತ್ರಿ ಮಾಡಿಕೊಳ್ಳೋದು ?

ಸುಮಿತ್ರ : ಐದು ಜನಕ್ಕಿಂತ ಹೆಚ್ಚಿಗೆ ಕೂಲಿಗಳನ್ನ ಬೇರೆ ರಾಜ್ಯಕ್ಕೆ ಕರೆದುಕೊಂಡು ಹೋಗುವ ಯಾರೇ ಕಂಟ್ರಾಕ್ಟರ್ ಇರಲಿ, ಅವನ ಹತ್ತಿರ ಆ ರಾಜ್ಯದ ಲೈಸೆನ್ಸ್ ಇರಬೇಕಾಗುತ್ತದೆ. ನಿಮ್ಮ ಆ ಸುಧಾಕರ ನಾಯಕ್ ಸರಿಯಾದ ಕಂಟ್ರಾಕ್ಟರ್ ಆಗಿದ್ದರೆ ಮಹಾರಾಷ್ಟ್ರ ಗೋವಾ ಸರಕಾರದ ಲೈಸೆನ್ಸ್ ಇರಬೇಕು. ಇದೆಯಾ ತಿಳಿದುಕೊಳ್ಳಿ. ಆ ಲೈಸೆನ್ಸ್‌ನಲ್ಲಿ, ಆತ ಅದೆಷ್ಟು ಜನರನ್ನ ಕರೆದುಕೊಂಡು ಹೋಗಬಹುದು, ಎಷ್ಟು ಕಾಲಕ್ಕೆ ಲೈಸೆನ್ಸ್ ಸಿಕ್ಕಿದೆ ಅಂತೆಲ್ಲಾ ಬರೆದಿರುತ್ತೆ.



ಪಾರ್ವತಿ : ಓ! ಲೈಸೆನ್ಸ್ ಇರುತ್ತಾ! ನಮ್ಮ ಹತ್ತಿರಾನೂ ಏನಾದರೂ ಚೀಟಿ ಕೊಡ್ತಾರಾ ಹಾಗಾದರೆ?

ಸುಮಿತ್ರ : ಹೌದು ಕೊಡಬೇಕು. ನಿಮ್ಮ ಹತ್ತಿರ ಒಂದು ಪಾಸ್ ಬುಕ್ ಕೊಡಬೇಕು. ಅದರಲ್ಲಿ ಏನೆಲ್ಲಾ ಬರೆದಿರಬೇಕು ಅಂದರೆ,

- ನಿಮ್ಮ ಭಾವಚಿತ್ರ, ಇರಬೇಕು.
- ಹೆಸರಿರಬೇಕು.
- ಕೆಲಸಮಾಡುವ ಜಾಗ ಬರೆದಿರಬೇಕು
- ಕೆಲಸದ ಅವದಿ
- ಸಂಬಳ ಎಷ್ಟು ಮತ್ತು ಪಾವತಿ ಹೇಗೆ ಎನ್ನುವ ವಿವರ
- ವಲಸೆ ಭತ್ತೆ
- ವಾಪಸಾಗಲಿಕ್ಕೆ ಪ್ರಯಾಣದ ಖರ್ಚು
- ಮುರಿತವೇನಾದರೂ ಇದ್ದರೆ ವಿವರ
- ಕೆಲಸಕ್ಕೆ ಸೇರಿಸಿ ಕೊಂಡ ತಾರೀಖು
- ಒಟ್ಟು ಹಾಜರಿ, ಒಟ್ಟು ಕೆಲಸದ ಲೆಖ್ಖ
- ನಿಮ್ಮ ಹತ್ತಿರದ ವಾರಸುದಾರರ ಹೆಸರು, ವಿಳಾಸ.




ಯಲ್ಲವ್ವ : ಅದೇನೋ ವಲಸೆ ಭತ್ತೆ ಅಂದೆ ನೀನು? ಅದೇನು?

ಸುಮಿತ್ರ : ನಿನ್ನನ್ನ ಮತ್ತೊಂದು ರಾಜ್ಯಕ್ಕೆ ಕರೆದುಕೊಂಡು ಹೋಗಿದ್ದಕ್ಕೆ ಕೊಡುವ ಭತ್ತೆ. ಅದು ಕನಿಷ್ಠ ಪಕ್ಷ 75 ರೂ. ಇರಬೇಕು ಅಥವಾ ತಿಂಗಳ ಸಂಬಳದ ಅರ್ಧ ಭಾಗ ಇರಬೇಕು. ಇದರಲ್ಲಿ ಯಾವುದು ಹೆಚ್ಚೋ ಅದು ಸರಿಯಾದ ಭತ್ತೆ.

ಪಾರ್ವತಿ : ಬಸ್ಸು ರೈಲಿನ ಖರ್ಚು ಯಾರು ಕೊಡ್ತಾರಕ್ಕ?

ಸುಮಿತ್ರ : ನಿಮ್ಮ ಸುಧಾಕರ ನಾಯಕನೇ ಅದನ್ನೂ ಕೊಡಬೇಕು. ಹೋಗಲಿಕ್ಕೆ ಬರಲಿಕ್ಕೆ ಎರಡೂ.

ಪಾರ್ವತಿ : ಮಧ್ಯದಲ್ಲಿ ಕೆಲಸ ನಿಲ್ಲಿಸಿ ಬಿಟ್ಟರು ಅನ್ನು. ಆಗ? ಹಣ ಹಿಂದಕ್ಕೆ ಕೊಡಬೇಕಾ?

ಸುಮಿತ್ರ : ಇಲ್ಲ. ಒಪ್ಪಂದಕ್ಕಿಂತ ಮುಂಚೆಯೇ ನಿಮ್ಮನ್ನ ಕೆಲಸದಿಂದ ತೆಗೆದರೂ ಆತ ವಲಸೆ ಭತ್ತೆ, ವಾಪಸು ಪ್ರಯಾಣದ ಹಣ ಹಿಂದಕ್ಕೆ ಕೇಳೋ ಹಾಗಿಲ್ಲ.

ಯಲ್ಲವ್ವ : ನಮ್ಮ ವಾರಸುದಾರರ ವಿಳಾಸ ಬರೆದಿರಬೇಕು ಅಂದೆಯಲ್ಲಾ, ಅದು ಯಾಕೆ?

ಸುಮಿತ್ರ : ಪರಸ್ಥಳ, ಪರವೂರು, ಆಗಬಾರದ್ದು ಆಗಿಬಿಡಬಹುದು. ಕೆಲಸ ಮಾಡೋವಾಗ ಕೈಕಾಲು ಮುರೀತು ಅನ್ನು, ಜೀವಕ್ಕೇನೆ ಅಪಾಯ ಬಂತು ಅನ್ನು. ಆಗ ಕಂಟ್ರಾಕ್ಟರ್ ಜವಾಬ್ದಾರಿ ಇರುತ್ತೆ. ಆತ ತಕ್ಷಣ ನಿನ್ನ ವಾರಸುದಾರರಿಗೆ ಟೆಲಿಗ್ರಾಂ ಕೊಟ್ಟು ತಿಳಿಸಬೇಕು. ಸರಕಾರಕ್ಕೆ ಪೂರ್ತಿ ವಿವರಕೊಟ್ಟು ತಿಳಿಸಬೇಕು. ಹಂಗೇನಾದರೂ ಆಗಿಬಿಟ್ಟರೆ ಕಾನೂನಿನ ಪ್ರಕಾರ ನಿಮ್ಮ ವಾರಸುದಾರರಿಗೆ ಪರಿಹಾರ ಕೊಡಬೇಕು ಆ ಕಂಟ್ರಾಕ್ಟರ್.

ಪಾರ್ವತಿ : ಅದೆಲ್ಲಾ ಸರಿಕಣಕ್ಕ. ಈ ನಾಯಕರನ್ನೇನೋ ನೋಡಿದೀವಿ. ವರ್ಸಾ ವರ್ಸಾ ಇಲ್ಲಿಗೆ ಬರ್‍ತಾ ಇರ್‍ತಾರೆ. ಒಂದು ಸಲ ಕೊಲ್ಲಾಪುರವೊ, ಪಣಜಿಯೋ ತಲುಪಿದೆವು ಅಂದರೆ ಮತ್ತೆ ಯಾರೋ ಜಮೀನುದಾರರ ಕೈಗೆ ಬೀಳ್ತೀವಿ ನಾವು. ಆತ ಒಳ್ಳೆ ಮನಷ್ಯ ಅಂತ ಹೆಂಗೆ ಹೇಳೋದು. ಸರಿಯಾಗಿ ಕೂಲಿಕೊಡ್ತಾರೆ ಅಂತ ಏನು ಗ್ಯಾರಂಟಿ?

ಸುಮಿತ್ರ : ನಿನಗೆ ಕೂಲಿ ಸಿಗಲಿಕ್ಕೆ ಮೂಲ ಜವಾಬ್ದಾರಿ ಇರೋದು ಕಂಟ್ರಾಕ್ಟರಿಗೇನೆ. ಅವನೇ ಕೊಡಬೇಕು, ಇಲ್ಲ ಮಾಲೀಕನ ಹತ್ತಿರ ಗಟ್ಟಿಯಾಗಿ ಹೇಳಿ ಕೊಡಿಸಬೇಕು. ಅದು ಆತನ ಜವಾಬ್ದಾರಿ.

ಯಲ್ಲವ್ವ : ಕೊಲ್ಲಾಪುರ, ಮಿರಜ್ ಕಡೆ ಎಷ್ಟು ಕೂಲಿಸಿಕ್ಕಬಹುದು ಅಂತಿಯಾ?

ಸುಮಿತ್ರ : ಈ ತರಹದ ಕೆಲಸಕ್ಕೆ ಸರ್ಕಾರ ಕನಿಷ್ಠ ಕೂಲಿ ಅಂತ ನಿಗದಿ ಮಾಡಿದೆಯಲ್ಲ, ಅಷ್ಟಂತೂ ಕೊಡಲೇಬೇಕು. ಜೊತೆಗೆ ನಿನಗೆ, ನಿನ್ನ ಮಗಳಿಗೆ ಸಹಿತ, ನಿನ್ನ ಗಂಡನಿಗೆ ಕೊಟ್ಟಷ್ಟೇ ಕೂಲಿಕೊಡಬೇಕು. ಹೆಣ್ಣಾಳು ಅಂತ ಕಡಿಮೆ ಕೊಡಲಿಕ್ಕೆ ಬರೋದಿಲ್ಲ.

ಪಾರ್ವತಿ : ಅಯ್ಯೋ ಅದೆಲ್ಲಾ ಇರಬಹುದು. ಇಲ್ಲಿ ಬಿಜಾಪುರದಲ್ಲಿ ಒಂದಲ್ಲ ಒಂದು ನೆಪ ಹುಡುಕಿ, ಜಮೀನುದಾರರು ನಮ್ಮ ಕೂಲಿ ಒಳಗೆ ಕಡಿತ ಮಾಡ್ತಾನೇ ಇರ್ತಾರೆ. ಅಲ್ಲೂ ಹಂಗೇ ಮಾಡಿದರೆ?



ಸುಮಿತ್ರ : ಮಾಡುವ ಹಾಗಿಲ್ಲ. ನಿಮ್ಮ ಕೂಲಿಯನ್ನ ಪೂರ್ತಿಯಾಗಿ, ನಗವಾಗಿ ಕೊಡಬೇಕು, ಯಾವುದೇ ತರಹದ ಕಡಿತ ಮಾಡಬಾರದು ಅಂತ ಕಾನೂನು ಹೇಳುತ್ತೆ. ಕಡೇ ಪಕ್ಷ ತಿಂಗಳಿಗೆ ಒಂದು ಸಲವಾದರೂ ಸಂಬಳ ಬಟವಾಡೆ ಮಾಡಬೇಕು, ಕಂಟ್ರಾಕ್ಟರ್ ಸಂಬಳ ಬಟವಾಡೆ ಮಾಡುವಾಗ ಮಾಲೀಕರ ಪ್ರತಿನಿಧಿ ಎದುರಿಗೆ ಇರಬೇಕು. ನಿಮಗೆ ಸಂಬಳ ಬಟವಾಡೆ ಆಗಿದೆ ಅಂತ ಅವರೂ ಸಹಿಮಾಡಬೇಕು ಅಂತ ಕಾನೂನು ಹೇಳುತ್ತೆ. ಕಂಟ್ರಾಕ್ಟರ್ ಮೊದಲು ಕೊಟ್ಟಹಾಗೆ ಮಾಡಿ, ಒಂದುಗಡೆಯಿಂದ ಯಾವುದೋ ನೆಪಹೇಳಿ ಮುರಿದುಕೊಳ್ಳೊ ಹಾಗಿಲ್ಲ. ಕಾನೂನು ಸಮ್ಮತವಲ್ಲದ ಯಾವುದೇ ಕಡಿತ ಮಾಡೋ ಹಾಗಿಲ್ಲ. ಉದಾಹರಣೆಗೆ, ಕಳೆದ ವರ್ಷ ಕೆಲಸಕ್ಕೆ ಗುಳೆ ಬಂದಿದ್ದಾಗ ಬಾಕಿ ಇತ್ತು ಅಂತಲೋ, ಅಥವಾ ಈ ವರ್ಷ ತೊಗೊಂಡಿದ್ದು ಅಂತ ಹೇಳಿ ಊರಿಗೆ ಹಿಂದೆ ಬಂದಮೇಲೆಯೋ ಮುರಿಹಾಕಿಕೊಳ್ಳುವಂತಿಲ್ಲ. ನೀವು ಅಕಸ್ಮಾತ್ ಅಲ್ಲಿ ಸಾಲ ಮಾಡಿದ್ದರೆ, ಅಲ್ಲೇ ಅದನ್ನ ಇತ್ಯರ್ಥ ಮಾಡಿ ಮಿಕ್ಕ ಸಂಬಳ ಕೊಟ್ಟುಬಿಡಬೇಕು.



ಪಾರ್ವತಿ : ಪಣಜಿ, ಕೊಲ್ಹಾಪುರ ಎಲ್ಲಾ ಬಹಳ ದೂರ. ಎರಡು ಮೂರು ದಿನ ಪ್ರಯಾಣದಲ್ಲೇ ಹೋಗಿ ಬಿಡುತ್ತೆ. ಅಷ್ಟು ದಿನ ಕೂಲಿ ಹೋದರೆ ಬಡವರ ಗತಿ ಏನು?

ಸುಮಿತ್ರ : ಇಲ್ಲ. ಪ್ರಯಾಣದ ದಿನಗಳ ಸಂಬಳ ಕಂಟ್ರಾಕ್ಟರ್ ಕೊಡಬೇಕು ಅಂತ ಕಾನೂನು ಹೇಳುತ್ತೆ.

ಯಲ್ಲವ್ವ : ಅಲ್ಲಿ ಚಳಿಯೋ ಮಳೆಯೋ ಗೊತ್ತಿಲ್ಲ. ನಮ್ಮ ಹತ್ತಿರ ಬಟ್ಟೆ ಬರೆ ಎಂಥಾದ್ದು ಇಲ್ಲ. ಹಾಸಿಕೊಳ್ಳಲಿಕ್ಕೆ! ಹೊದೆಯಲಿಕ್ಕೆ!

ಸುಮಿತ್ರ : ನಾನು ಕೆಲಸ ಮಾಡ್ತಿದ್ದೆನಲ್ಲ ಪಂಜಾಬ್, ಅಲ್ಲಿ ಕೆಲವು ಸಲ 5 ಡಿಗ್ರಿಗಿಂತ ಕಡಿಮೆ ಉಷ್ಣಾಂಷ ಇರುತ್ತೆ. ಅಲ್ಲಿ ಆಳುಗಳಿಗೆ ಕಂಟ್ರಾಕ್ಟರ್ ಉಣ್ಣೆ ಬಟ್ಟೆ ಕೊಡಬೇಕಾಗಿತ್ತು. ಇಲ್ಲಿಯೂ ಬಟ್ಟೆ ಬರೆ ಕೊಡಬೇಕು.

ಪಾರ್ವತಿ : ಹರಕಲೋ ಮುರುಕಲೋ ಇಲ್ಲಿ ಒಂದು ಗುಡಿಸಲು ಅಂತ ಇದೆ ನಮಗೆ. ಅಲ್ಲಿ? ಉಳಿದುಕೊಳ್ಳಲಿಕ್ಕೆ ಗುಡಿಸಲು ಕಟ್ಟಿಕೋತಾ ಕೂರಲಿಕ್ಕಾಗುತ್ತಾ ಸುಮಿತ್ರಕ್ಕ.

ಸುಮಿತ್ರ : ಅಂಥ ಕೆಲವು ವ್ಯವಸ್ಥೆಗಳನ್ನ ಕಂಟ್ರಾಕ್ಟರ್ ಮಾಡಬೇಕಾಗುತ್ತೆ. ಉದಾಹರಣೆಗೆ,

- ನಿಮ್ಮ ಮನೆ ವ್ಯವಸ್ಥೆ, ಖಾಯಿಲೆ ಕಸಾಲೆ ನೋಡಿಕೊಳ್ಳಲಿಕ್ಕೆ ವೈದ್ಯರ ವ್ಯವಸ್ಥೆ,
- ಆಸ್ಪತ್ರೆ ಸೇರಿದರೆ, ಆಸ್ಪತ್ರೆ ಖರ್ಚು ಕೂಡ ನೋಡಿಕೊಳ್ಳಬೇಕಾಗುತ್ತೆ ಆತ. ಆಸ್ಪತ್ರೆಲಿರೋ ಅಷ್ಟು ದಿನ ಊಟ ತಿಂಡಿ ವ್ಯವಸ್ಥೆಯೂ ಆತನದ್ದೇ ಜವಾಬ್ದಾರಿ.
- ಕುಡಿಯುವ ನೀರಿನ ವ್ಯವಸ್ಥೆ, ಕಕ್ಕಸುಗಳ ವ್ಯವಸ್ಥೆ, ಹೆಂಗಸರಿಗೆ ಪ್ರತ್ಯೇಕ ಪಾಯಿಖಾನೆಗಳು, ಸ್ನಾನದ ವ್ಯವಸ್ಥೆ, ಬಟ್ಟೆ ಒಗೆಯುವ ವ್ಯವಸ್ಥೆ, ಆತನೇ ಮಾಡಬೇಕು ಅಂತ ನಿಯಮ.
- ಊಟದ ಕ್ಯಾಂಟೀನ್ ಕೂಡಾ ಇರಬೇಕು. ಲಾಭ ಮಾಡದೇ ಇರೋ ಅಂಥಾದ್ದು.
- ಹೆಂಗಸರು ಇಪ್ಪತ್ತಕ್ಕೂ ಹೆಚ್ಚು ಮಂದಿ ಇದ್ದರೆ ಅವರ ಮಕ್ಕಳುಮರಿಗೆ ಆಟಪಾಟಕ್ಕೆ ವ್ಯವಸ್ಥೆ ಇರಬೇಕು. ಮೂರು ತಿಂಗಳಿಗಿಂತ ಹೆಚ್ಚಿಗೆ ನಿಮ್ಮ ಕೆಲಸ ಇದ್ದರಂತೂ ಇದು ಅನಿವಾರ್ಯವಾಗಿ ಆಗಲೇಬೇಕು.

ಹವಾಮಾನ ವಿಪರೀತಗಳಿರುವ ಜಾಗಗಳಲ್ಲಿ, ಕಂಟ್ರಾಕ್ಟರನು ಬಟ್ಟೆಬರೆ ಕೊಡಬೇಕು





ಆಸ್ಪತ್ರೆ ಖರ್ಚನ್ನ ಪೂರ್ತಿಯಾಗಿ ಕಂಟ್ರ್ಯಾಕ್ಟರನೇ ಕೊಡಬೇಕು

ಪಾರ್ವತಿ : ಲೈಸೆನ್ಸ್ ಬಗ್ಗೆ ಹೇಳಿದೆಯಕ್ಕ. ಆದರೆ ನಾವು ಕೆಲಸ ಮಡೋದು ಮತ್ತೊಬ್ಬನ ಹತ್ತಿರ. ಕಂಟ್ರ್ಯಾಕ್ಟರಿಗೆ ಲೈಸೆನ್ಸ್ ಇದ್ದರೆಷ್ಟು ಬಿಟ್ಟರೆಷ್ಟು.

ಸುಮಿತ್ರ : ನಿಮ್ಮ ತರಹ ಬೇರೆ ರಾಜ್ಯದಿಂದ ಗುಳೆ ಬಂದವರು ಐದಕ್ಕಿಂತ ಹೆಚ್ಚು ಜನರನ್ನು ಕೂಲಿಗೆ ಇಟ್ಟುಕೊಂಡಿದ್ದರೆ ಆಗ ಮಾಲೀಕ ಕೂಡಾ ಕಛೇರಿಯಲ್ಲಿ ಹೆಸರು ನೋಂದಾಯಿಸಿಕೊಂಡಿರಬೇಕು. ಅದಕ್ಕೆ ಅಂತಲೇ ಅವರಿಗೆ, ಕಂಟ್ರ್ಯಾಕ್ಟುದಾರರಿಗೆ ಒಂದು ಶುಲ್ಕ ಇದೆ. ಕಾನೂನು ಪ್ರಕಾರ ನಡೆದುಕೊಳ್ತೀವಿ ಅಂತ ಅವರು ಮುಚ್ಚಳಿಕೆ ಬರೆದುಕೊಡಬೇಕು.

ಯಲ್ಲವ್ವ : ಅದೆಲ್ಲಾ ಸರಿಕಣವ್ವ. ಕೊಲ್ಹಾಪುರ ಅವರ ಊರು, ಕಛೇರಿಗಳಲ್ಲಿ ಅಧಿಕಾರಿಗಳ ಪರಿಚಯ ಅವರಿಗಿರುತ್ತೆ, ಅವರ ಮಾತು ನಡೀತದೆ.

**ಸುಮಿತ್ರ** : ಬರೇ ಅಲ್ಲಿನ ಕಾರ್ಮಿಕ ಅಧಿಕಾರಿಗಳು ಅಷ್ಟೆ ಅಲ್ಲ, ಇಲ್ಲಿನವರೂ ಬಂದು ವಿಚಾರಣೆ ಮಾಡಬಹುದು. ಪಂಜಾಬಿನಲ್ಲಿ ನಾನಿದ್ದಾಗ ಬಿಹಾರದಿಂದ ಲೇಬರ್ ಅಧಿಕಾರಿಗಳು ಬಂದು ತಪಾಸಣೆ ಮಾಡಿದ್ದನ್ನ ನಾನೇ ನೋಡಿದೀನಿ. ಕಂಟ್ರಾಕ್ಟರ್ ನಿಮ್ಮನ್ನ ಕರೆದುಕೊಂಡು ಹೋಗೋದಕ್ಕೆ ಮುಂಚೆ ಇಲ್ಲಿನ ಅಧಿಕಾರಿಗಳಿಗೂ ಪೂರ್ತಿ ವಿವರ ತಿಳಿಸಬೇಕಾಗುತ್ತೆ. ಜೊತೆಗೆ ನೀವೂ ಕೂಡಾ ಹೋಗೋಕ್ಕೆ ಮುಂಚೆ ಇಲ್ಲಿನ ಕಛೇರಿಗೆ ಹೋಗಿ ಅರ್ಜಿ ಬರೆದುಕೊಂಡು, ಎಲ್ಲಿಗೆ ಹೋಗ್ತಿದೀರಿ, ಎಷ್ಟು ದಿವಸ, ಯಾರು ಕರೆದುಕೊಂಡು ಹೋಗ್ತಿದಾರೆ, ಅಂತೆಲ್ಲಾ ತಿಳಿಸಿಬಿಡುವುದು ಕ್ಷೇಮ.

**ಪಾರ್ವತಿ** : ಈ ನಾಯಕರು ಕೆಲಸ ಕೊಡಲಿಕ್ಕಾಗಲಿಲ್ಲ ಅನ್ನು. ನಾವು ಅಲ್ಲೇ ಮೀರಜದಲ್ಲಿ ಅಥವಾ ಕೊಲ್ಹಾಪುರದಲ್ಲಿ ಮತ್ತೊಂದು ಕಡೆ ಹೋಗಿ ಕೆಲಸ ಕೇಳಬಹುದಾ?



ಸುಮಿತ್ರ : ಕೇಳಬಹುದು. ಆದರೆ ಆಗ ನೀವು ವಲಸೆ ಕೆಲಸಗಾರರು ಅಂತ ಆಗೋದಿಲ್ಲ. ಹೊಸ ಮಾಲೀಕರ ಹತ್ತಿರ ವಲಸೆ ಕಾರ್ಮಿಕರಿಗೆ ಸಿಕ್ಕೊ ಎಲ್ಲಾ ಸೌಲಭ್ಯ ಕೊಡಿ ಅಂತ ಕೇಳಲಿಕ್ಕೆ ಬರಲ್ಲ. ಉದಾಹರಣೆಗೆ, ಇರಲಿಕ್ಕೆ ಮನೆ, ಇತ್ಯಾದಿ ಕೇಳೊಕ್ಕೆ ಬರಲ್ಲ. ಆದರೆ ಕನಿಷ್ಟ ಕೂಲಿ ಇತ್ಯಾದಿ ನಿಯಮಗಳು, ಆ ರಾಜ್ಯದ ಬೇರೆ ಕೆಲಸಗಾರರಿಗೆ ಸಲ್ಲುವ ಎಲ್ಲ ಹಕ್ಕುಗಳೂ ನಿಮಗೆ ಸಲ್ಲುತ್ತವೆ. ಪರ ರಾಜ್ಯಗಳಿಗೆ ವಲಸೆ ಹೋಗುವ ಕೆಲಸಗಾರರ ರಕ್ಷಣೆಗೆ ಅಂತಲೇ ಮಾಡಿರುವ ವಿಶೇಷ ಕಾನೂನು ಏನಿದೆ, ಅದು ಅನ್ವಯ ಆಗೋದಿಲ್ಲ ಅಷ್ಟೆ.

ಪಾರ್ವತಿ : ಕಾನೂನಿದೆ ನಿಜ. ಪಾಲಿಸೋರು ಯಾರು ಅಂತ ಬೇಕಲ್ಲ. ಕಂಟ್ರಾಕ್ಟರುಗಳು, ಜಮೀನುದಾರರು, ಅಷ್ಟು ಸುಲಭಕ್ಕೆ ಸಿಗೇಬೀಳ್ತಾರೆ ಅಂದು ಕೊಂಡಿದೀಯೇನಕ್ಕ.

ಸುಮಿತ್ರ : ಕಾನೂನು ಜಾರಿಗೆ ಬರಬೇಕಾದರೆ ಒತ್ತಡ ಬರಬೇಕು. ಒತ್ತಡ ತರಬೇಕಾದವರು ನೀವು. ಒಂಟಿಯಾಗಿ ನಿಂತು ಒತ್ತಡ ತರ್ತೀನಿ ಅಂದರೆ ಆಗಲ್ಲ. ಒಗ್ಗಟ್ಟಾಗಬೇಕು, ಅಕ್ಷರ ಕಲೀಬೇಕು, ತಿಳುವಳಿಕೆ ಪಡೀಬೇಕು. ಅವರು ಕಾನೂನನ್ನ ಪಾಲಿಸುತ್ತಿಲ್ಲ ಅಂತ ಕಂಡರೆ ದೂರು ಕೊಡಬೇಕು. ಕಾನೂನಿನ ಪ್ರಕಾರ ತಪ್ಪಿತಸ್ಥ ಕಂಟ್ರಾಕ್ಟರನಿಗೆ ಜುಲ್ಮಾನೆ ಹಾಕ್ತಾರೆ, ಜೈಲಿಗೆ ಕೂಡಾ ಕಳುಹಿಸಬಹುದು ಅಂತ ಕಾನೂನಿದೆ.

ಯಲ್ಲವ್ವ : ದೂರು ಕೊಟ್ಟು ಗೆಲ್ಲಲಿಕ್ಕೆ ಅಷ್ಟು ದಿನ ಅಲ್ಲಿರಬೇಕಲ್ಲ ತಾಯಿ. ಅದೂ ಅಲ್ಲದೆ ಕೆಲಸ ಮುಗಿದಮೇಲೆ ತಾನೆ ನಾವು ದೂರು ಕೊಡೋಕೆ ಸಾಧ್ಯ ? ಮೊದಲೇ ದೂರು ಕೊಟ್ಟರೆ ನಮ್ಮನ್ನ ಹುರಿದು ಮುಕ್ಕಿಬಿಡ್ತಾರೆ, ಕೆಲಸದಿಂದ ತೆಗೆದುಹಾಕ್ತಾರೆ. ಪರವೂರು, ಪರಭಾಷೆ,..!

ಸಮಿತ್ರ : ಈ ಕಾನೂನಿನ ಪ್ರಕಾರ ನೀವು ಊರಿಗೆ ಹಿಂದೆ ಬಂದ ಮೇಲೆ ಕೂಡಾ ದೂರು ಸಲ್ಲಿಸಬಹುದು ಅಂತ ಇದೆ. ಹಿಂದೆ ಬಂದ ಆರು ತಿಂಗಳ ಒಳಗಾಗಿ ದೂರು ಸಲ್ಲಿಸಬೇಕು. ದೂರಿನ ವಿಚಾರಣೆ ನಿಮ್ಮ ರಾಜ್ಯದಲ್ಲೇ, ನಿಮ್ಮ ಜಿಲ್ಲೆಯಲ್ಲೇ ನಡೆಯತಕ್ಕದ್ದು ಅಂತ ಕಾನೂನು ಹೇಳುತ್ತೆ. ನಿಮ್ಮ ಊರಿನಲ್ಲಿ ನಿಮಗೆ ಯಾತರ ಭಯ ಹೇಳು ?

ವಲಸೆ ಕಾರ್ಮಿಕರಿಗೆ ಸಂಬಂಧಿಸಿದ ಕಾನೂನಿನ ಉಲ್ಲಂಘನೆಯಾಗಿದ್ದರೆ, ಅದು ಕಂಟ್ರಾಕ್ಟರನಿಂದಾಗಿರಲಿ, ನಿಯೋಜಕನಿಂದಾಗಿರಲಿ, ನೀವು ದೂರು ಸಲ್ಲಿಸಬಹುದು.

- ಕಂಟ್ರಾಕ್ಟರ್ ಅಥವಾ ನಿಯೋಜಕನ ನೊಂದಣೆ ಹಾಗೂ ಲೆಸೆನ್ಸ್ ಸಂಬಂಧಿಸಿದಂತೆ ದೂರು, ಸಹಾಯಕ ಲೇಬರ್ ಕಮಿಷನರ್ (ಕೇಂದ್ರೀಯ) ಇವರಿಗೆ ಸಲ್ಲಿಸತಕ್ಕದ್ದು.

- ಕಾರ್ಮಿಕರ ಸವಲತ್ತುಗಳಿಗೆ ಸಂಬಂಧಿಸಿದ ದೂರು ಆಗಿದ್ದಲ್ಲಿ, ಅದನ್ನು ಪ್ರಾಂತೀಯ ಲೇಬರ್ ಕಮಿಷನರ್ (ಕೇಂದ್ರೀಯ) ಇವರಿಗೆ ಸಲ್ಲಿಸತಕ್ಕದ್ದು.



## ಈ ಮಾಲಿಕೆಯಲ್ಲಿ

'**ನಮ್ಮ ಕಾನೂನುಗಳು**' ಮಹಿಳೆಯರಿಗೆ ಸಾಮಾನ್ಯವಾಗಿ ಅನ್ವಯಿಸುವ ಕಾನೂನುಗಳ ಬಗ್ಗೆ ಸರಳರೀತಿಯಲ್ಲಿ ತಿಳುವಳಿಕೆ-ನೀಡುವ ಹತ್ತು ಪುಸ್ತಿಕೆಗಳ ಒಂದು ಮಾಲಿಕೆಯಾಗಿದೆ. ಈ ಮಾಲಿಕೆಯಲ್ಲಿ, ಕೆಳವರ್ಗದ ಹೆಂಗಸರು, ಅದರಲ್ಲೂ ನವ ಸಾಕ್ಷರ ಮಹಿಳೆಯರು, ಬಳಸಲಿಕ್ಕೆ ಸಾಧ್ಯವಾಗಲಿ ಎನ್ನುವ ಉದ್ದೇಶದಿಂದ ನಿರೂಪಣೆಯನ್ನು ಸಾಧ್ಯವಾದಷ್ಟೂ ಸರಳವಾಗಿ, ಸಂಕ್ಷಿಪ್ತವಾಗಿ, ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ, ಉಪಮೆಗಳನ್ನ, ಉದಾಹರಣೆಗಳನ್ನ ನೀಡಿ ರಚಿಸಲಾಗಿದೆ. ಯಾರಿಗೆ ಈ ಕಾನೂನುಗಳು ತೀರ ಅವಶ್ಯಕವಿದೆಯೋ ಅಂತಹವರನ್ನ ಈ ಪುಸ್ತಿಕೆಗಳು ತಲುಪಬೇಕೆಂದು ನಮ್ಮ ಆಶಯ. ಈ ಹತ್ತು ಪುಸ್ತಕಗಳು ಕಾನೂನಿನ ಸಮಗ್ರ ಪಾಠವೇನಲ್ಲ. ಒಟ್ಟಾರೆಯಾಗಿ ಮಹಿಳೆಯರಿಗೆ ತಮ್ಮ ನಾಗರೀಕ ಹಕ್ಕುಗಳ ಅರಿವಾಗಲಿ, ಅವರು ಆತ್ಮವಿಶ್ವಾಸದಿಂದ ಹಾಗೂ ಸಂದಿಗ್ಧರಹಿತ ರೀತಿಯಲ್ಲಿ ತಮ್ಮ ಸಮಸ್ಯೆಗಳಿಗೆ ತಾವೇ ಧ್ವನಿಕೊಡುವಂತಾಗಲಿ ಎಂದು ಈ ಮಾಲಿಕೆ ಬಯಸುತ್ತದೆ.

ಈ ಪುಸ್ತಿಕೆಗಳ ಹಿಂದಿ ಅನುವಾದದಲ್ಲಿ, ಈಗಾಗಲೇ ಅವುಗಳನ್ನ, ಗ್ರಾಮೀಣ ಮಹಿಳೆಯರ ಕಾರ್ಯಾಗಾರಗಳಲ್ಲಿ ಬಳಸಿ, ಇವುಗಳ ಪರಿಣಾಮವನ್ನ ಪರೀಕ್ಷಿಸಲಾಗಿದೆ. ಹಲವು ಸಾಮಾಜಿಕ ಕಾರ್ಯಕರ್ತರುಗಳೊಡನೆ, ಕಾನೂನು ತಜ್ಞರುಗಳೊಡನೆ, ನಡೆಸಿದ ಕಾರ್ಯಾಗಾರಗಳಲ್ಲಿ ಕೂಡ ಇವುಗಳ ಬಳಕೆ ಹಾಗೂ ಪರೀಕ್ಷೆ ಆಗಿದೆ. ಆಗ ಬಂದ ಅಭಿಪ್ರಾಯಗಳನ್ನ ಮನನ ಮಾಡಿ ಪುಸ್ತಿಕೆಗಳನ್ನ ತಿದ್ದಿ ಪ್ರಕಟಿಸಲಾಗಿದೆ.

ಈಗ ಕನ್ನಡದಲ್ಲಿ '**ನಮ್ಮ ಕಾನೂನುಗಳು**' ನಿಮ್ಮ ಕೈಸೇರುತ್ತಿದೆ. ಮೇಲೆ ಹೇಳಿದ ಆಶಯಗಳನ್ನ ಗಮನದಲ್ಲಿಟ್ಟುಕೊಂಡು, ಇಲ್ಲಿ ಸಲ್ಲುವ ಉಪಮೆಗಳು, ಉದಾಹರಣೆಗಳನ್ನ, ಬಳಸಿಕೊಂಡು ಹೆಗ್ಗೋಡಿನ **ಕವಿಕಾವ್ಯ ಟ್ರಸ್ಟಿನವರು** ಕನ್ನಡ ಅವತರಣಿಕೆಯನ್ನ ಸಿದ್ದಗೊಳಿಸಿದ್ದಾರೆ. **ಯುನಿಸೆಫ್** ಸಂಸ್ಥೆಯ ಉದಾರ ನೆರವಿನಿಂದಾಗಿ ಇದರ ಪ್ರಕಟಣೆ ಸಾಧ್ಯವಾಗುತ್ತಿದೆ. ಈ ಪುಸ್ತಕಗಳ ಪ್ರಯೋಜನವನ್ನ, ನವಸಾಕ್ಷರ ಮಹಿಳೆಯರು, ದುಡಿಯುವ ಮಹಿಳೆಯರ ಸಂಘಟನೆಗಳು, ಅಂಗನವಾಡಿ ಕಾರ್ಯಕರ್ತೆಯರು, ಪಂಚಾಯತಿ ಹಾಗೂ ತಾಲ್ಲೂಕು ಮಟ್ಟದ ಅಧಿಕಾರಿಗಳು, ಆರೋಗ್ಯ ಕಾರ್ಯಕರ್ತರು, ಶಾಲಾ ಅಧ್ಯಾಪಕರುಗಳು, ಸಾಕ್ಷರತಾ ಕಾರ್ಯಕರ್ತರು, ಹಾಗೂ 'ಡ್ವಾಕ್ರ' ಗುಂಪುಗಳು, ಪಡೆಯಬೇಕೆಂಬ ಉದ್ದೇಶದಿಂದ ಕರ್ನಾಟಕ ರಾಜ್ಯಮಹಿಳಾ ಅಬಿವೃದ್ಧಿ ನಿಗಮ, ವ್ಯಾಪಕ ರೀತಿಯಲ್ಲಿ ಅವುಗಳನ್ನ ಜನತೆಗೆ ತಲುಪಿಸಲು ಏರ್ಪಾಡುಮಾಡಿದೆ.

**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ**

16ನೆಯ ಮಹಡಿ, ಬಹುಪಯೋಗಿ ಕಟ್ಟಡ, ಮಹಾತ್ಮಗಾಂಧಿ ರಸ್ತೆ

ಬೆಂಗಳೂರು : 560001, ಫೊ: 5587418, 5588250

ಮೂಲ ಪ್ರಕಾಶಕರು

**ಮಾರ್ಗ್**

113-ಎ, ಶಾಪುರ್ ಜಾಟ್, ಏಷಿಯಾಡ್ ಗ್ರಾಮದ ಸಮೀಪ

ನವದೆಹಲಿ-110016, ಫೊ : 6467463.